# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 80(724) |
| ಸದಸ್ಯರ ಹೆಸರು | ಶ್ರೀ. ಮುನಿರಾಜು ಗೌಡ ಪಿ.ಎಂ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವವರು | ಮಾನ್ಯ ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲ ಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು. |
| ಉತ್ತರಿಸಬೇಕಾದ ದಿನಾಂಕ | 22-02-2022 |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯಾದ್ಯಂತ ಸರ್ಕಾರದಿಂದ ಹಾಗೂ ಸ್ವಯಂ ಸೇವಾ ಸಂಸ್ಥೆಗಳಿಂದ ನಡೆಸಲಾಗುತ್ತಿರುವ ಮಕ್ಕಳ ಪಾಲನಾ ಕೇಂದ್ರಗಳ ಸಂಖ್ಯೆ ಎಷ್ಟು; | ರಾಜ್ಯಾದ್ಯಂತ ಸರ್ಕಾರದಿಂದ ಹಾಗೂ ಸ್ವಯಂ ಸೇವಾ ಸಂಸ್ಥೆಗಳಿಂದ ನಡೆಸಲಾಗುತ್ತಿರುವ ಮಕ್ಕಳ ಪಾಲನಾ ಕೇಂದ್ರಗಳ ವಿವರ ಕೆಳಕಂಡಂತಿದೆ. |

| | | |
|---|---|---|
| 01 | ಸರ್ಕಾರದಿಂದ ನಿರ್ವಹಿಸಲಾಗುತ್ತಿರುವ ಮಕ್ಕಳ ಪಾಲನಾ ಸಂಸ್ಥೆಗಳು | 98 |
| 02 | ಸರ್ಕಾರದ ಸಹಾಯಾನುದಾನದಿಂದ ನಡೆಸಲಾಗುತ್ತಿರುವ ಮಕ್ಕಳ ಪಾಲನಾ ಸಂಸ್ಥೆಗಳು | 61 |
| 03 | ಸ್ವಯಂ ಸೇವಾ ಸಂಸ್ಥೆಗಳಿಂದ ನಿರ್ವಹಿಸಲಾಗುತ್ತಿರುವ ಮಕ್ಕಳ ಪಾಲನಾ ಕೇಂದ್ರಗಳು | 848 |
| | ಒಟ್ಟು | 1007 |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಆ) | ಈ ಕೇಂದ್ರಗಳಲ್ಲಿ ಆಶ್ರಯ ಪಡೆದಿರುವ ಮಕ್ಕಳ ಸಂಖ್ಯೆ ಎಷ್ಟು; | ಈ ಕೇಂದ್ರಗಳಲ್ಲಿ ಪಾಲನೆ ಮತ್ತು ರಕ್ಷಣೆ ಪಡೆಸಿರುವ ಮಕ್ಕಳ ಸಂಖ್ಯೆಗಳ ವಿವರ ಕೆಳಗಿನಂತಿವೆ. (ದಿನಾಂಕ:16.02.2022ರ ಅಂತ್ಯಕ್ಕೆ) |

| | | |
|---|---|---|
| 01 | ಸರ್ಕಾರಿ ಮಕ್ಕಳ ಪಾಲನಾ ಸಂಸ್ಥೆಗಳಲ್ಲಿ ಪಾಲನೆ ಮತ್ತು ರಕ್ಷಣೆ ಪಡೆದಿರುವ ಮಕ್ಕಳ ಸಂಖ್ಯೆ | 2192 |
| 02 | ಸರ್ಕಾರದ ಅನುದಾನದಿಂದ ನಡೆಸಲಾಗುತ್ತಿರುವ ಸಂಸ್ಥೆಗಳಲ್ಲಿ ಪಾಲನೆ ಮತ್ತು ರಕ್ಷಣೆ ಪಡೆದಿರುವ ಮಕ್ಕಳ ಸಂಖ್ಯೆ | 1031 |
| 03 | ಸ್ವಯಂ ಸೇವಾ ಸಂಸ್ಥೆಗಳಿಂದ ನಿರ್ವಹಿಸಲಾಗುತ್ತಿರುವ ಮಕ್ಕಳ ಪಾಲನಾ ಕೇಂದ್ರಗಳಲ್ಲಿ ಮಕ್ಕಳ ಪಾಲನೆ ಮತ್ತು ರಕ್ಷಣೆ ಪಡೆದಿರುವ ಮಕ್ಕಳ ಸಂಖ್ಯೆ | 14891 |
| | ಒಟ್ಟು | 18114 |

| | | |
|---|---|---|
| ಇ) | ರಾಜ್ಯದಲ್ಲಿ ಇರುವ ಮಕ್ಕಳ ಪಾಲನಾ ಕೇಂದ್ರಗಳ ಪೈಕಿ ಬಹುತೇಕ ಕೇಂದ್ರಗಳಲ್ಲಿ ಈಗಾಗಲೇ ಹಲವಾರು ವರ್ಷಗಳಿಂದ ಆಪ್ತ ಸಮಾಲೋಚಕರುಗಳು ಇಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ರಾಜ್ಯದಲ್ಲಿನ ಒಟ್ಟು 1007 ಮಕ್ಕಳ ಪಾಲನಾ ಕೇಂದ್ರಗಳ ಪೈಕಿ ಆಪ್ತ ಸಮಾಲೋಚಕರ 584 ಹುದ್ದೆಗಳು ಭರ್ತಿಯಾಗಿದ್ದು, 423 ಕೇಂದ್ರಗಳಲ್ಲಿ ಹುದ್ದೆ ಖಾಲಿ ಇರುವುದು ಗಮನಕ್ಕೆ ಬಂದಿರುತ್ತದೆ.<br><br>ಇದರಲ್ಲಿ ಸರ್ಕಾರ ಹಾಗೂ ಸರ್ಕಾರದ ಅನುದಾನದಿಂದ ನಡೆಸಲಾಗುತ್ತಿರುವ 159 ಮಕ್ಕಳ ಪಾಲನಾ ಸಂಸ್ಥೆಗಳ ಪೈಕಿ 155 ಸಂಸ್ಥೆಗಳಲ್ಲಿ ಆಪ್ತ ಸಮಾಲೋಚಕರ ಹುದ್ದೆಗಳನ್ನು ಹೊರಗುತ್ತಿಗೆ ಮೂಲಕ ಭರ್ತಿ ಮಾಡಲಾಗಿದ್ದು, 4 ಹುದ್ದೆಗಳು ಖಾಲಿಯಿರುತ್ತದೆ.<br><br>ಸ್ವಯಂ ಸೇವಾ ಸಂಸ್ಥೆಗಳಿಂದ ನಿರ್ವಹಿಸಲಾಗುತ್ತಿರುವ 848 ಮಕ್ಕಳ ಪಾಲನಾ ಸಂಸ್ಥೆಗಳಲ್ಲಿ ಒಟ್ಟು 429 ಹುದ್ದೆಗಳು ಭರ್ತಿಯಾಗಿದ್ದು 419 ಹುದ್ದೆಗಳು ಖಾಲಿ ಇರುತ್ತದೆ. |
| ಈ) | ಬಂದಿದ್ದಲ್ಲಿ, ಮಕ್ಕಳ ಪಾಲನಾ ಕೇಂದ್ರಗಳಲ್ಲಿ ಆಪ್ತ ಸಮಾಲೋಚಕರ ಕೊರತೆಯನ್ನು ನಿವಾರಿಸುವ ನಿಟ್ಟಿನಲ್ಲಿ ಸರ್ಕಾರವು ಕೈಗೊಂಡಿರುವ ಕ್ರಮಗಳೇನು? | ಸರ್ಕಾರಿ ಅನುದಾನಿತ ಹಾಗೂ ಖಾಸಗಿ ಸಂಸ್ಥೆಗಳ ಮೂಲಕ ನಿರ್ವಹಿಸಲಾಗುತ್ತಿರುವ ಮಕ್ಕಳ ಪಾಲನಾ ಸಂಸ್ಥೆಗಳಲ್ಲಿ ಆಪ್ತ ಸಮಾಲೋಚಕರ ಹುದ್ದೆಯನ್ನು ಭರ್ತಿ ಮಾಡಲು ಅಗತ್ಯ ನಿರ್ದೇಶನ ಹಾಗೂ ಸೂಕ್ತ ಮೇಲುಸ್ತುವಾರಿ ಕೈಗೊಳ್ಳಲು ಜಿಲ್ಲಾ ಮಕ್ಕಳ ರಕ್ಷಣಾಧಿಕಾರಿಗಳಿಗೆ ನಿರ್ದೇಶನಾಲಯದಿಂದ ಏರ್ಪಡಿಸಿರುವ ಸಭೆಗಳಲ್ಲಿ ತಿಳಿಸಲಾಗಿರುತ್ತದೆ.<br><br>ಇದಲ್ಲದೆ 24X7 ಮಕ್ಕಳಿಗಾಗಿ ಉಚಿತ ಆಪ್ತ ಸಮಾಲೋಚನೆ ಸಂಖ್ಯೆ:14499 ಸೇವೆಯನ್ನು ಅಗತ್ಯತೆಗೆ ಅನುಗುಣವಾಗಿ ಉಪಯೋಗಿಸಿ ಕೊಳ್ಳಲು ಹಾಗೂ ಸಾರ್ವಜನಿಕರ ಉಪಯೋಗಕ್ಕಾಗಿಯೂ ಸಹ ವ್ಯಾಪಕ ಪ್ರಚಾರ ಕೈಗೊಳ್ಳುವಂತೆ ಜಿಲ್ಲಾ ಮಕ್ಕಳ ರಕ್ಷಣಾಧಿಕಾರಿಗಳಿಗೆ ತಿಳಿಸಲಾಗಿರುತ್ತದೆ.<br><br>ಆಪ್ತ ಸಮಾಲೋಚಕರನ್ನು ನೇಮಿಸದ ಮಕ್ಕಳ ಪಾಲನಾ ಸಂಸ್ಥೆಗಳನ್ನು ಬಾಲನ್ಯಾಯ ( ಮಕ್ಕಳ ಪಾಲನೆ ಮತ್ತು ರಕ್ಷಣೆ) ಕಾಯ್ದೆ-2015ರ ಕಲಂ 41ರ ಪ್ರಕಾರ ಕ್ರಮವಹಿಸಲಾಗುವುದು. |

ಸಂಖ್ಯೆ: ಮಮಇ 24 ಮಭಾಬ 2022

Halappa B.S.

(ಆಚಾರ್ ಹಾಲಪ್ಪ ಬಸಪ್ಪ)
ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು ಮಕ್ಕಳ
ಅಭಿವೃದ್ಧಿ ಹಾಗೂ ವಿಕಲಚೇತನರ ಹಾಗೂ
ಹಿರಿಯ ನಾಗರಿಕರ ಸಬಲೀಕರಣ ಸಚಿವರು.